# ಸ್ತೋತ್ರದ ರಚನೆಯ ಹಿನ್ನೆಲೆ

7ನೆಯ ಶತಮಾನದಲ್ಲಿ ಭಾರತದೇಶದ ಉಜ್ಜಯಿನಿ ನಗರದಲ್ಲಿ ರಾಜಾ ಭೋಜರಾಜನು ಅತ್ಯಂತ ಪ್ರಸಿದ್ಧನಾಗಿದ್ದನು. ಕವಿರತ್ನ ಕಾಳಿದಾಸನು ಆತನ ಆಸ್ಥಾನ ಕವಿಯಾಗಿದ್ದನು. ವಿದ್ಯೆಯ ಜೊತೆಗೆ ಆತನಿಗೆ ಅಹಂಕಾರವು ತುಂಬಿಕೊಂಡಿತ್ತು. ಅದೇ ಸಮಯದಲ್ಲಿ ಆಚಾರ್ಯ ಮಾನತುಂಗ ಎಂಬ ಜೈನ ಆಚಾರ್ಯರು ಇದ್ದರು. ಕಾರಣವಶಾತ್ ವಿಹಾರ ಮಾಡುತ್ತ ಮಾನತುಂಗರ ಸಂಘವು ಉಜ್ಜಯನಿಗೆ ಬಂದಿತು. ಅವರ ವಿದ್ವತ್ತು, ಸದಾಚರಣೆ ಕಂಡ ಜನರು ಅವರ ದರ್ಶನಕ್ಕಾಗಿ ತಂಡೋಪ ತಂಡವಾಗಿ ಹೋಗುತ್ತಿದ್ದರು.

ಇದನ್ನು ತಿಳಿದ ಭೋಜರಾಜನು ಅವರ ದರ್ಶನಕ್ಕೆ ಹೋಗಲು ಇಚ್ಛಿಸಿದನು. ಆದರೆ ಕವಿಕಾಳಿದಾಸ ಆತನನ್ನು ತಡೆದು ನೀವು ಈ ರಾಜ್ಯದ ರಾಜರು. ತಮ್ಮ ದರ್ಶನಕ್ಕಾಗಿ ಎಲ್ಲ ಪ್ರಜೆಗಳೂ ಅಲ್ಲದೆ ವಿದ್ವಾನರು, ತ್ಯಾಗಿಗಳು ಬರಬೇಕು ವಿನಹ ತಾವು ಅವರ ದರ್ಶನಕ್ಕೆ ಹೋಗಬಾರದು ಎಂದು ಹೇಳಿದನು. ಅದರಂತೆ ರಾಜನು ಸೈನಿಕರನ್ನು ಕಳೆಯಿಸಿ ಮುನಿಗಳು ರಾಜನ ಭೇಟಿಗಾಗಿ ಬರಬೇಕು ಎಂದು ಹೇಳಿ ಬರುವಂತೆ ತಿಳಿಸಿದನು. ಸೈನಿಕರು ರಾಜನ ಇಚ್ಛೆಯನ್ನು ಆಚಾರ್ಯ ಮಾನತುಂಗರಿಗೆ ತಿಳಿಸಿದರು. ಅದಕ್ಕೆ ಆಚಾರ್ಯರು ನಾವು ಸರ್ವಸಂಗ ಪರಿತ್ಯಾಗಿಗಳು ನಮಗೆ ಎಲ್ಲರೂ ಒಂದೇ. ನಾವು ದಿನನಿತ್ಯ ಭಗವಂತರ ದರ್ಶನ ಮಾಡುತ್ತೇವೆ ಹೊರತಾಗಿ ಬೇರೆ ವ್ಯಕ್ತಿಗಳ ದರ್ಶನ ಮಾಡುವುದಿಲ್ಲ ಎಂದು ಹೇಳಿ ಕಳಿಸಿದರು. ಇದನ್ನು ಕೇಳಿ ಕಾಳಿದಾಸನಿಗೆ ಸಿಟ್ಟು ಬಂದಿತು. ಆತ ಮಹಾರಾಜರಿಗೆ ತಿಳಿಸಿದ, ಅವರು ಬರದಿದ್ದರೆ ಅವರನ್ನು ಬಂಧಿಸಿ ಕರೆಯಿಸಿರಿ ಎಂದ. ರಾಜ ಭೋಜ ಹಾಗೆಯೇ ಮಾಡಿದ ಮತ್ತು ಅವರಿಂದ ಆತನಿಗೆ ಅನಿಷ್ಟವಾಗಬಾರದು ಎಂದು ಯೋಚಿಸಿ ಅವರನ್ನು ನಲವತ್ತೆಂಟು ದ್ವಾರಗಳುಳ್ಳ ಜೈಲಿನಲ್ಲಿ ಬಂಧನದಲ್ಲಿರಿಸಿದ.



ಆಚಾರ್ಯರು ಈ ಉಪಸರ್ಗವನ್ನು ಶಾಂತವಾಗಿ ಸಹಿಸಿ ಜೈಲಿನಲ್ಲಿ 2 – 3 ದಿನ ಉಪವಾಸ ಕಳೆದರು. ಅಲ್ಲದೆ ರಾಜನಿಗೆ ದೈವ ಭಕ್ತಿಯ ಮಹಿಮೆಯನ್ನು ತೋರಿಸಲು ಭಗವಾನ್ ಆದಿನಾಥರ ಸ್ತುತಿಯನ್ನು ಬರೆದರು. ಅವರು ನಲವತ್ತೆಂಟು ಬಾಗಿಲಗಳ ಜೈಲಿನಲ್ಲಿ ಇದ್ದುದರಿಂದ ನಲವತ್ತೆಂಟು ಶ್ಲೋಕಗಳನ್ನು ರಚಿಸಿ ಅದನ್ನು ಭಕ್ತಿಯಿಂದ ಹೇಳಿದರು. ಈ ಸ್ತುತಿಯಿಂದ ಶಾಸನ ದೇವತೆಗಳು ಪ್ರಸನ್ನರಾಗಿ ಅವರು ಜೈಲಿನ 48 ಬಾಗಿಲುಗಳು ತಾವಾಗಿಯೇ ತೆರೆಯುವಂತೆ ಮಾಡಿದರು. ಬಾಗಿಲು ಕಾಯುತ್ತಿದ್ದ ಸೈನಿಕರು ಮೂರ್ಛೆ ಹೋದರು ಆಗ ಆಚಾರ್ಯರು ಕಮಂಡಲನ್ನು ತೆಗೆದುಕೊಂಡು ಹೊರಗೆ ಬಂದರು. ಮೂರ್ಛೆಯಿಂದ ಎದ್ದ ಸೈನಿಕರು ಪುನಃ ಓಡಿಹೋಗಿ ಅವರನ್ನು ಬಂಧಿಸಿ ಜೈಲಿನಲ್ಲಿ ಕೂಡಿಹಾಕಿದರು. ತಕ್ಷಣ ಪುನಃ ಬಾಗಿಲುಗಳು ತೆಗೆದುಕೊಂಡವು. ಭಯಭೀತರಾದ ಸೈನಿಕರು ಈ ವಿಚಿತ್ರ ಘಟಣೆಯನ್ನು ರಾಜನಿಗೆ ತಿಳಿಸಿದರು. ರಾಜನೂ ಸಹ ಹೆದರಿ ಆಚಾರ್ಯರ ಬಳಿಗೆ ಬಂದು ಕ್ಷಮೆ ಕೇಳಿದನು ಅಲ್ಲದೆ ಅವರಿಗೆ ರಾಜ ಮರ್ಯಾದೆಯಿಂದ ಸನ್ಮಾನಿಸಿ ಗೌರವಿಸಿದನು.

ಆಗ ಜನರು ಕಾಳಿದಾಸ ಹಾಗೂ ಆಚಾರ್ಯ ಮಾನತುಂಗರ ಮಧ್ಯೆ ವಿದ್ವತ್ಪೂರ್ಣ ಚರ್ಚೆ ನಡೆಯಲಿ ಎಂದು ಆಶಿಸಿದರು. ಕಾಳಿದಾಸ ಅವರನ್ನು ಕೀಳಾಗಿ ಕಂಡು ಅವರನ್ನು ಧರ್ಮ ಚರ್ಚೆಗೆ ಆಹ್ವಾನಿಸಿದನು. ಅದರಂತೆ ಚರ್ಚೆ ನಡೆಯಿತು. ಆಚಾರ್ಯರು ತಮ್ಮ ಅಸಮಾನ್ಯ ಜ್ಞಾನದಿಂದ ಕಾಳಿದಾಸನನ್ನು ಸೋಲಿಸಿದರು. ವ್ಯಾಕುಲನಾದ ಕಾಳೀದಾಸನು ತನ್ನ ಆರಾಧ್ಯ ದೇವತೆ ಕಾಳೀ ದೇವಿಯನ್ನು ಆರಾಧಿಸಿ ತನ್ನನ್ನು ಈ ಪ್ರಸಂಗದಿಂದ ಪಾರು ಮಾಡುವಂತೆ ಕೇಳಿದನು. ಆತನ ರಕ್ಷಣೆಗಾಗಿ ಕಾಳೀ ದೇವಿಯು ಭಯಂಕರ ರೂಪದಲ್ಲಿ ಕಾಣಿಸಿಕೊಂಡಳು, ಆಗ ಆದಿನಾಥ ತೀರ್ಥಂಕರರ ಯಕ್ಷಿಣಿ ಚಕ್ರೇಶ್ವರಿಗೆ ಈ ವಿಷಯ ಅವಧಿಜ್ಞಾನದಿಂದ ತಿಳಿಯಿತು. ಆಕೆಯೂ ಸಹ ಅಗಾಧ ರೂಪದಲ್ಲಿ ಅವತರಿಸಿ ಕಾಳೀ ದೇವಿಗೆ ಎಚ್ಚರಿಸಿದಳು ಒಂದು ವೇಳೆ ಆಚಾರ್ಯರಿಗೆ ಕೇವಲ ಸಣ್ಣ ತೊಂದರೆಯಾದರೂ ಆಕೆಯನ್ನು ಸಮಾಪ್ತಗೊಳಿಸುವುದಾಗಿ

ತಿಳಿಸಿದಳು. ಚಕ್ರೇಶ್ವರಿಯ ಶಕ್ತಿಯ ಮುಂದೆ ಆಕೆಯ ಆಟ ನಡೆಯಲಿಲ್ಲ. ಆಗ ಆಕೆಯು ಕಾಳೀದಾಸನಿಗೆ ವಿಷಯ ಶರಣಾಗತನಾಗುವುದೊಂದೇ ದಾರಿ ಎಂದು ತಿಳಿಸಿದಳು. ಲಜ್ಜಿತನಾದ ಕಾಳೀದಾಸನು ಸೋಲು ಒಪ್ಪಿಕೊಂಡು ಆಚಾರ್ಯರಿಗೆ ತಲೆಬಾಗಿದನು. ಆಚಾರ್ಯರು ಅವನನ್ನು ಆಶೀರ್ವದಿಸಿದರು.

ಹೀಗೆ ಜೀವನದ ಕಠಿಣ ಪ್ರಸಂಗದಲ್ಲಿ ಪಾರು ಮಾಡಿದ ಆಚಾರ್ಯರ 48 ಶ್ಲೋಕಗಳ ಕಾವ್ಯವು ಭಕ್ತಾಮರ ಸ್ತೋತ್ರ ಎಂದು ಪ್ರಸಿದ್ಧಿ ಪಡೆಯಿತು. ಅಂದಿನಿಂದ ಜೈನ ಶ್ರಾವಕ – ಶ್ರಾವಕಿಯರು ಈ ಸ್ತೋತ್ರವನ್ನು ಪ್ರತಿನಿತ್ಯ ತಮ್ಮ ಮನೆಗಳಲ್ಲಿ ಹೇಳಿಕೊಳ್ಳಲು ಪ್ರಾರಂಭಿಸಿದರು. ಅನೇಕ ಜನರಿಗೆ ಇದರ ಲಾಭವಾಗಿದೆ. ಅವರು ಅನೇಕ ವಿಘ್ನಗಳಿಂದ ಪಾರಾಗಲು ಸಹಾಯವಾಗಿದೆ. ನಾವೂ ಸಹ ದಿನಾಲು ಈ ಸ್ತೋತ್ರವನ್ನು ಬಿಡದೇ ಪಠಿಸಿ ಇದರ ಲಾಭ ಪಡೆಯೋಣ.





**ಭಕ್ತಾಮರ ಪ್ರಣತಮೌಲಿ ಮಣಿ ಪ್ರಭಾಣಾ –**
**ಮುದ್ದ್ಯೋತಕಂ ದಲಿತಪಾಪ ತಮೋವಿತಾನಮ್ ।**
**ಸಮ್ಯಕ್ ಪ್ರಣಮ್ಯ ಜಿನಪಾದ ಯುಗಂ ಯುಗಾದಾ**
**ವಾಲಂಬನಂ ಭವಜಲೇ ಪತತಾಂ ಜನಾನಾಂ ॥1॥**

**ಮುಕುಟ ಮಣಿ ರಂಜಿತ ದೇವತೆಗಳಿಂದ ತಮಗೆ ತಲೆಬಾಗಿ ವಂದನೆ ।**
**ಸಂಸಾರ ಸಾಗರದಲ್ಲಿ ಬಿದ್ದ ಜನರನ್ನು ಪಾರು ಮಾಡುವ, ಅರಹಂತರಿಗೆ ನನ್ನ ವಂದನೆ ॥1॥**



ಯಃ ಸಂಸ್ತುತಃ ಸಕಲ ವಾಙ್ಮಯ ತತ್ವಭೋಧಾ –
ದುದ್ಭೂತ ಬುದ್ಧಿ ಪಟುಭಿಃ ಸುರಲೋಕನಾಥೈಃ ।
ಸ್ತೋತ್ರೈರ್ಜಗತ್ತ್ರಿತಯ ಚಿತ್ತ ಹರೈರುದಾರೈಃ
ಸ್ತೋಷ್ಯೇ ಕಿಲಾಹಮಪಿತಂ ಪ್ರಥಮಂ ಜಿನೇಂದ್ರಂ ।।2।।

ಸಂಪೂರ್ಣ ಶಾಸ್ತ್ರಪಾರಂಗತ ದೇವೇಂದ್ರನಿಂದ ತಮ್ಮ ಸ್ತುತಿ ಗುಣಗಾನ ।
ಅಂತಹ ಪ್ರಥಮ ತೀರ್ಥಂಕರ ಆದಿನಾಥರಿಗೆ, ನನ್ನ ಭಕ್ತಿ ಸ್ತವನ ।। 2 ।।





ಬುದ್ಧ್ಯಾ ವಿನಾಪಿ ವಿಬುಧಾರ್ಚಿತ ಪಾದಪೀಠ
ಸ್ತೋತುಂ ಸಮುದ್ಯತಮತಿರ್ವಿಗತತ್ರಪೋಽಹಮ್ ।।
ಬಾಲಂ ವಿಹಾಯ ಜಲ ಸಂಸ್ಥಿತ ಮಿಂದು ಬಿಂಬ –
ಮನ್ಯಃಕ ಇಚ್ಛತಿ ಜನಃ ಸಹಸಾ ಗೃಹೀತುಮ್ ।।3।।

ನೀರಿನಲ್ಲಿ ಕಾಣುವ ಚಂದ್ರಬಿಂಬ ಹಿಡಿಯಲು ಬಯಸುವ ಮಗು ಅಲ್ಪಮತಿ ।
ಅಲಜ್ಜನಾದರೂ ತಮ್ಮ ಗುಣಗಾನ ಮಾಡಲು ಬಯಸುವ ನಾನೂ ಒಬ್ಬ ಮಂದಮತಿ ।।3।।



ವಕ್ತುಂ ಗುಣಾನ್ಗುಣ ಸಮುದ್ರ ಶಶಾಂಕ ಕಾಂತಾನ್ ।
ಕಸ್ತೇ ಕ್ಷಮಃ ಸುರಗುರು ಪ್ರತಿಮೋಽಪಿ ಬುದ್ಧ್ಯಾ ॥
ಕಲ್ಪಾಂತಕಾಲ ಪವನೋದ್ಧತನಕ್ರ ಚಕ್ರಂ
ಕೋ ವಾ ತರೀತುಮಲ ಮಂಬುನಿಧಿಂ ಭುಜಾಭ್ಯಾಮ್ ॥4॥

ಪ್ರಚಂಡ ಗಾಳಿಗೆ ಸಿಕ್ಕ ಸಮುದ್ರ ಅಲ್ಲೋಲ – ಕಲ್ಲೋಲವಾದಾಗ ಈಜಲಾರಿಗೆ ಸಾಧ್ಯ ।
ಮಹಾನ್ ಪುರುಷರಾದ ತಮ್ಮ ಗುಣಗಾನ ನನ್ನಂತಹ ಹೀನಮತಿಗೆ ಹೇಗೆ ಸಾಧ್ಯ ॥4॥





ಸೋಽಹಂ ತಥಾಪಿ ತವ ಭಕ್ತಿ ವಶಾನ್ಮುನೀಶ ।
ಕರ್ತುಂ ಸ್ತವಂ ವಿಗತಶಕ್ತಿರಪಿ ಪ್ರವೃತ್ತಃ ॥
ಪ್ರೀತ್ಯಾತ್ಮವೀರ್ಯ ಮವಿಚಾರ್ಯ ಮೃಗೀ ಮೃಗೇಂದ್ರಂ ।
ನಾಭ್ಯೇತಿ ಕಿಂ ನಿಜಶಿಶೋಃ ಪರಿಪಾಲನಾರ್ಥಮ್ ॥5॥

ಚಿಗರೆ ಮರಿ ಸಿಂಹದ ಬಾಯಿಗೆ ಸಿಕ್ಕಿದೆ, ರಕ್ಷಣೆಗೆ ತಾಯಿ ಚಿಗರೆ ಸಿಂಹದ ಹಿಂದೆ ಹೊರಟಿದೆ ।
ಅಶಕ್ಯನಾದ ನನ್ನಿಂದ ತಮ್ಮ ಸ್ತುತಿಸುವ, ದುಃಸ್ಸಾಹಸ ನಡೆದಿದೆ ॥5॥



ಅಲ್ಪಶ್ರುತಂ ಶ್ರುತವತಾಂ ಪರಿಹಾಸಧಾಮ
ತ್ವದ್ಭಕ್ತಿರೇವ ಮುಖರೀ ಕುರುತೇ ಬಲಾನ್ಮಾಮ್ ।।
ಯತ್ಕೋಕಿಲಃ ಕಿಲ ಮಧೌ ಮಧುರಂ ವಿರೌತಿ ।
ತಚ್ಚಾರುಚೂತಕಲಿಕಾ ನಿಕರೈಕ ಹೇತು ಃ ।।6।।

ಕೋಗಿಲೆ ಕಂಠ ಮಧುರವಾಯಿತು ಮಾವಿನ ಹೂ – ಚಿಗುರೆಲೆ ತಿಂದಾಗ ।
ನನ್ನ ಕಂಠದಲ್ಲಿ ಹಾಡು ಉಕ್ಕಿತು – ಭಕ್ತಿಯಿಂದ ಪ್ರೇರಿತನಾದಾಗ ।।6।।





ತ್ವತ್ಸಂಸ್ತವೇನ ಭವಸಂತತಿ ಸನ್ನಿಬದ್ಧಂ ।
ಪಾಪಂ ಕ್ಷಣಾತ್ಕ್ಷಯಮುಪೈತಿ ಶರೀರಭಾಜಾಮ್ ।।
ಆಕ್ರಾಂತಲೋಕ ಮಲಿ ನೀಲಮ ಶೇಷಮಾಶು ।
ಸೂರ್ಯಾಂಶು ಭಿನ್ನಮಿವ ಶಾರ್ವರ ಮಂಧಕಾರಮ್ ।।7।।

ಸೂರ್ಯನ ಕಿರಣಗಳಿಂದ ಘೋರ ಕಾರ್ಗತ್ತಲೆಯ ನಾಶ ।
ತಮ್ಮ ಭಕ್ತಿಯಿಂದ ಸಂಸಾರಿ ಪ್ರಾಣಿಗಳ, ಭವ ಭವಗಳ ಕರ್ಮ ನಾಶ ।।7।।



ಮತ್ವೇತಿ ನಾಥ ತವ ಸಂಸ್ತವನಂ ಮಯೇದ ।
ಮಾರಭ್ಯತೇ ತನುದಿಯಾಪಿ ತವ ಪ್ರಭಾವಾತ್ ॥
ಚೇತೋ ಹರಿಷ್ಯತಿ ಸತಾಂ ನಲಿನೀದಲೇಷು ।
ಮುಕ್ತಾಫಲದ್ಯುತಿಮುಪೈತಿನನೂದಬಿಂದುಃ ॥8॥

ನೀರ ಹನಿ ಮುತ್ತಿನಂತೆ ಹೊಳೆಯುವುದು, ಕಮಲದ ಎಲೆ ಮೇಲೆ ಬಿದ್ದಾಗ ।
ನನ್ನ ಹಾಡು ಸಜ್ಜನರಿಗೆ ಆನಂದ ಕೊಡುವುದು, ತಮ್ಮ ಕೃಪೆ ಇದ್ದಾಗ ॥8॥





ಆಸ್ತಾಂ ತವ ಸ್ತವನಮಸ್ತ ಸಮಸ್ತ ದೋಷಂ ।
ತ್ವತ್ಸಂಕಥಾऽಪಿ ಜಗತಾಂ ದುರಿತಾನಿ ಹಂತಿ ॥
ದೂರೇ ಸಹಸ್ರ ಕಿರಣಃ ಕುರುತೇ ಪ್ರಭೈವ ।
ಪದ್ಮಾಕರೇಷು ಜಲಜಾನಿ ವಿಕಾಸ ಭಾಂಜಿ ॥9॥

ಸರೋವರದ ಕಮಲಗಳು ಅರಳುವವು ಸೂರ್ಯನ ಕಿರಣಗಳಿಂದ ।
ನಮ್ಮ ಪಾಪಗಳು ದೂರವಾಗುವವು, ತಮ್ಮ ಗುಣಗಾನದಿಂದ ॥9॥



ನಾತ್ಯದ್‌ಭುತಂ ಭುವನ ಭೂಷಣ ಭೂತನಾಥ ।
ಭೂತೈರ್ಗುಣೈರ್ಭುವಿ ಭವಂತ ಮಭಿಷ್ಟುವಂತಃ ॥
ತುಲ್ಯಾ ಭವಂತಿ ಭವತೋ ನನು ತೇನ ಕಿಂ ವಾ ।
ಭೂತ್ಯಾಶ್ರಿತಂ ಯ ಇಹ ನಾತ್ಮಸಮಂ ಕರೋತಿ ॥10॥

ಅನ್ಯ ದೇವತೆಗಳ ಸ್ತುತಿ ಸ್ತವನಗಳಿಂದ ಭಕ್ತರು ಅವರ ಹಾಗೆ ದೇವತೆಗಳಾಗಲಾರರು ।
ಅರಿಹಂತರ ಸ್ತುತಿ ಸ್ತವನಗಳಿಂದ, ಭಕ್ತರು ಅವರಂತೆ ಅರಿಹಂತರಾಗುವರು ॥10॥





ದೃಷ್ಟ್ವಾ ಭವಂತ ಮನಿಮೇಷ ವಿಲೋಕನೀಯಂ ।
ನಾನ್ಯತ್ರ ತೋಷಮುಪಯಾತಿ ಜನಸ್ಯ ಚಕ್ಷುಃ ॥
ಪೀತ್ವಾಪಯ ಃ ಶಶಿಕರ ದ್ಯುತಿ ದುಗ್ಧ ಸಿಂಧೋ ಃ ।
ಕ್ಷಾರಂ ಜಲಂ ಜಲನಿಧೇ ರಶಿತುಂ ಕ ಇಚ್ಛೇತ್ ॥11॥

ಕ್ಷೀರ ಸಮುದ್ರದ ಅಮೃತಪಾನ ಮಾಡಿದ ನಂತರ ಬೇರೆ ಸಮುದ್ರದ ಉಪ್ಪುನೀರು ರುಚಿಸದು ।
ತಮ್ಮ ಪ್ರಶಾಂತ ಮುಖದ ದರ್ಶನದ ನಂತರ ಅನ್ಯ ದೇವರ ದರ್ಶನಕೆ ಮನಸಾಗದು ॥11॥



ಯೈಃ ಶಾಂತರಾಗರುಚಿಭಿ ಃ ಪರಮಾಣುಭಿಸ್ತ್ವಂ ।
ನಿರ್ಮಾಪಿತ ಸ್ತ್ರಿಭುವನೈಕ ಲಲಾಮಭೂತ ॥
ತಾವಂತ ಏವ ಖಲು ತೇಽಪ್ಯಣವಃ ಪೃಥಿವ್ಯಾಂ ।
ಯತ್ತೇ ಸಮಾನ ಮಪರಂ ನಹಿ ರೂಪಮಸ್ತಿ ॥12॥

ತಮ್ಮ ದೇಹ ರಚನೆಯಾಯಿತು, ಜಗತ್ತಿನ ಎಲ್ಲ ಶಾಂತ ಪರಮಾಣುಗಳಿಂದ ।
ಅನ್ಯ ದೇವತೆಗಳಿಗೆ ಆ ಸೌಂದರ್ಯ ಸಿಗದಾಯಿತು, ಶಾಂತ ಪರಮಾಣುಗಳ ಕೊರತೆಯಿಂದ ॥2 ॥





ವಕ್ತ್ರಂ ಕ್ವತೇ ಸುರ – ನರೋರಗ ನೇತ್ರಹಾರಿ ।
ನಿಃಶೇಷ ನಿರ್ಜಿತ ಜಗತ್ರಿತಯೋಪ ಮಾನಂ ॥
ಬಿಂಬಂ ಕಲಂಕ ಮಲಿನಂ ಕ್ವನಿಶಾಕರಸ್ಯ ।
ಯದ್ವಾಸರೇ ಭವತಿ ಪಾಂಡುಪಲಾಶ ಕಲ್ಪಮ್ ॥13॥

ಸುರ ನರ ನಾಗೇಂದ್ರರಿಗಾಯಿತು ತಮ್ಮ ಭವ್ಯ ರೂಪ ಸುಂದರ ಕಲಾ ಪೂರ್ಣ ।
ದೋಷಗಳಿಂದ ಕೂಡಿದ ಚಂದ್ರನ ರೂಪ ಅಪೂರ್ಣ ಕಳಾಹೀನ ॥13॥



ಸಂಪೂರ್ಣ ಮಂಡಲ ಶಶಾಂಕ ಕಲಾಕಲಾಪ ।
ಶುಭ್ರಾಗುಣಾಸ್ತ್ರಿಭುವನಂ ತವ ಲಂಘಯಂತಿ ।
ಯೇ ಸಂಶ್ರಿತಾಸ್ತ್ರಿಜಗದೀಶ್ವರ ನಾಥಮೇಕಂ ।
ಕಸ್ತಾನ್ನಿವಾರಯತಿ ಸಂಚರತೋ ಯಥೇಷ್ಟಮ್ ।।14।।

ನಿಮ್ಮ ಗುಣಗಳು ವಿಶ್ವದೆಲ್ಲೆಡೆ ಹರಡಿವೆ ಪೂರ್ಣ ಚಂದ್ರನಂತೆ ।
ತಮ್ಮ ಆಶ್ರಯ ಪಡೆದ ಜನರು ವಿಹಾರ ಮಾಡುವರು ಯಾರೂ ತಡೆಯದಂತೆ ।।14।।





ಚಿತ್ರಂ ಕಿಮತ್ರ ಯದಿ ತೇ ತ್ರಿದಶಾಂಗನಾಭಿ ।
ರ್ನೀತಂ ಮನಾಗಪಿ ಮನೋ ನ ವಿಕಾರಮಾರ್ಗಮ್ ।।
ಕಲ್ಪಾಂತಕಾಲಮರುತಾ ಚಲಿತಾ ಚಲೇನ ।
ಕಿಂ ಮಂದರಾದ್ರಿಶಿಖರಂ ಚಲಿತಂ ಕದಾಚಿತ್ ।।15।।

ಸ್ವರ್ಗದ ದೇವಾಂಗನೆಯರು ತಮ್ಮ ಚಿತ್ತವನ್ನು ಚಂಚಲಗೊಳಿಸಲಸಾಧ್ಯ ।
ಪ್ರಚಂಡ ಮಾರುತಕೆ, ಗಿರಿ ಕಂದರಗಳು ಚಲಿಸಿದರೂ ಸುಮೇರು ಪರ್ವತ ಚಲಿಸಲಸಾಧ್ಯ ।।15।।



ನಿರ್ಧೂಮ ವರ್ತಿ – ರಪ – ವರ್ಜಿತ ತೈಲಪೂರಃ ।
ಕೃತ್ಸ್ನಂ ಜಗತ್ತ್ರಯಮಿದಂ ಪ್ರಕಟೀಕರೋಷಿ ॥
ಗಮ್ಯೋ ನ ಜಾತು ಮರುತಾಂ ಚಲಿತಾ ಚಲಾನಾಂ ।
ದೀಪೋಽಪರಸ್ತ್ವಮಸಿನಾಥ ಜಗತ್ಪ್ರಕಾಶಃ ॥16॥

ತಾವು ಹೊಗೆ ಇಲ್ಲದ, ಬತ್ತಿ ಇಲ್ಲದ, ಎಣ್ಣೆ ಇಲ್ಲದ ದೀಪ ।
ಬಿರುಗಾಳಿಗೂ ಅಲುಗಾಡದ ಆರದ ಜ್ಞಾನ ದೀಪ ॥16॥





ನಾಸ್ತಂ ಕದಾಚಿದುಪಯಾಸಿ ನ ರಾಹುಗಮ್ಯಃ ।
ಸ್ಪಷ್ಟೀಕರೋಷಿ ಸಹಸಾ ಯುಗಪಜ್ಜಗಂತಿ ॥
ನಾಂಭೋ – ಧರೋದರ ನಿರುದ್ಧ ಮಹಾಪ್ರಭಾವಃ ।
ಸೂರ್ಯಾತಿಶಾಯಿ ಮಹಿಮಾಸಿ ಮುನೀಂದ್ರ, ಲೋಕೇ ॥17॥

ತಾವು ಅಸ್ತನಾಗದ ರಾಹುಗ್ರಹ ಪೀಡಿತನಾಗದ ಮೋಡ ಮುಸುಕದ ಸೂರ್ಯ ।
ಏಕಕಾಲಕೆ ಮೂರು ಲೋಕಗಳನು ಬೆಳಗುವ ಮಹಾನ್ ಸೂರ್ಯ ॥17॥



ನಿತ್ಯೋದಯಂ ದಲಿತಮೋಹ ಮಹಾಂಧಕಾರಂ ।
ಗಮ್ಯಂ ನ ರಾಹು ವದನಸ್ಯ ನ ವಾರಿದಾನಾಮ್ ॥
ವಿಭ್ರಾಜತೇ ತವ ಮುಖಾಬ್ಜ ಮನಲ್ಪ ಕಾಂತಿ ।
ವಿದ್ಯೋತ ಯಜ್ಜಗದ ಪೂರ್ವ ಶಶಾಂಕ ಬಿಂಬಮ್ ॥18॥

ತಾವು ನಿತ್ಯ ಉದಯಿಸುವ ಜಗತ್ತನ್ನು ನಿರಂತರ ಬೆಳಗುವ ಚಂದ್ರ ।
ರಾಹು ಹಿಡಿಯದ ಮೋಡದಿಂದ ಮುಸಕದ, ವೃದ್ಧಿ ಕ್ಷಯಗಳಿಲ್ಲದ ಪೂರ್ಣ ಚಂದ್ರ ॥18॥





ಕಿಂ ಶರ್ವರೀಷು ಶಶಿನಾಽನ್ಹಿ ವಿವಸ್ವತಾ ವಾ ।
ಯುಷ್ಮನ್ಮುಖೇಂದು ದಲಿತೇಷು ತಮ ಸ್ಸುನಾಥ ॥
ನಿಷ್ಪನ್ನ ಶಾಲಿವನಶಾಲಿನಿ ಜೀವಲೋಕೇ ।
ಕಾರ್ಯಂ ಕಿಯಜ್ ಜಲಧರೈರ್ಜಲಭಾರ ನಮ್ರೈಃ ॥19॥

ಭತ್ತದ ಹೊಡೆ ಬಿಚ್ಚಿದ ಮೇಲೆ ಮಳೆಯ ಪ್ರಯೋಜವೇನು ? ।
ಜನರ ಅಂಧಕಾರ ನಾಶವಾದ ಮೇಲೆ ಸೂರ್ಯ ಚಂದ್ರರ ಅವಶ್ಯಕತೆ ಏನು ? ॥19॥



ಜ್ಞಾನಂ ಯಥಾ ತ್ವಯಿ ವಿಭಾತಿ ಕೃತಾವಕಾಶಂ ।
ನೈವಂ ತಥಾ ಹರಿಹರಾದಿಷು ನಾಯಕೇಷು ॥
ತೇಜೋಸ್ಫುರನ್‌ಮಣಿಷು ಯಾತಿ ಯಥಾ ಮಹತ್ತ್ವಂ ।
ನೈವಂ ತು ಕಾಚಶಕಲೇ ಕಿರಣಾಕುಲೇಽಪಿ ॥20॥

ತಮ್ಮ ಕೇವಲಜ್ಞಾನ ಮೂರು ಲೋಕವ ಬೆಳಗುವದು. ಇದು ಹರಿ–ಹರ ಬ್ರಹ್ಮಾದಿಗಳಿಗೆ ಅಸಾಧ್ಯ ।
ಶುದ್ಧ ರತ್ನಗಳು ಹೊಳೆಯುವ ಹಾಗೆ ಗಾಜಿನ ತುಂಡುಗಳು ಹೊಳೆಯಲಸಾಧ್ಯ ॥20॥





ಮನ್ಯೇ ವರಂ ಹರಿಹರಾದಯ ಏವ ದೃಷ್ಟಾ ।
ದೃಷ್ಟೇಷು ಯೇಷು ಹೃದಯಂ ತ್ವಯಿ ತೋಷಮೇತಿ ॥
ಕಿಂ ವೀಕ್ಷಿತೇನ ಭವತಾ ಭುವಿ ಯೇನ ನಾನ್ಯಃ ।
ಕಶ್ಚಿನ್ಮನೋ ಹರತಿ ನಾಥ ಭವಾಂತರೇಽಪಿ ॥21॥

ತಮ್ಮ ದರ್ಶನ ನೀಡುವುದು ಹೃದಯಕ್ಕೆ ತೃಪ್ತಿ ಆನಂದ ।
ಹರಿ – ಹರ ದೇವತೆಗಳ ದರ್ಶನದಿಂದ ಸಿಗದು ಇಂಥ ಆನಂದ ॥21॥



ಸ್ತ್ರೀಣಾಂ ಶತಾನಿ ಶತಶೋ ಜನಯಂತಿ ಪುತ್ರಾನ್ ।
ನಾನ್ಯಾಸುತಂ ತ್ವದುಪಮಂ ಜನನೀಪ್ರಸೂತಾ ॥
ಸರ್ವಾದಿಶೋ ದಧತಿ ಭಾನಿ ಸಹಸ್ರ ರಶ್ಮಿಂ ।
ಪ್ರಾಚ್ಯೇವ ದಿಗ್ಜನಯತಿ ಸ್ಫುರದಂಶುಜಾಲಮ್ ॥22 ॥

ತಮ್ಮಂತಹ ಜಿನ ಸೂರ್ಯನನ್ನು ಪಡೆದ ಭಾಗ್ಯ ತಮ್ಮ ತಾಯಿಗಲ್ಲದೆ ಅನ್ಯ ತಾಯಿಯರಿಗಸಾಧ್ಯ ।
ಅಸಂಖ್ಯ ತಾರೆಗಳು ಒಬ್ಬ ಸೂರ್ಯನ ಹಾಗೆ ಕತ್ತಲನ್ನು ಹೋಗಲಾಡಿಸಲಸಾಧ್ಯ ॥22 ॥





ತ್ವಾಮಾ ಮನಂತಿ ಮುನಯಃ ಪರಮಂ ಪುಮಾಂಸ ।
ಮಾದಿತ್ಯ ವರ್ಣಮಮಲಂ ತಮಸಃ ಪುರಸ್ತಾತ್ ॥
ತ್ವಾಮೇವ ಸಮ್ಯಗುಪಲಭ್ಯ ಜಯಂತಿ ಮೃತ್ಯುಂ ।
ನಾನ್ಯಃ ಶಿವಃ ಶಿವಪದಸ್ಯ ಮುನೀಂದ್ರ ಪಂಥಾಃ ॥23॥

ತಾವು ಜನಗಳ ಅಜ್ಞಾನವನ್ನು ದೂರ ಮಾಡುವ ವಿಶಿಷ್ಟ ಸೂರ್ಯ ।
ತಮ್ಮ ಭಕ್ತಿಯಿಂದ ಮುನಿಗಳಿಗೆ ಸಿಗುವದು ಶಿವ ಪದ ಇದು ಆಶ್ಚರ್ಯ ॥23॥



ತ್ವಾಮವ್ಯಯಂ ವಿಭುಮಚಿಂತ್ಯ ಮಸಂಖ್ಯ ಮಾದ್ಯಂ ।
ಬ್ರಹ್ಮಾಣಮೀಶ್ವರ ಮನಂತ ಮನಂಗ ಕೇತುಮ್ ।
ಯೋಗೀಶ್ವರಂ ವಿದಿತಯೋಗ ಮನೇಕಮೇಕಂ ।
ಜ್ಞಾನಸ್ವರೂಪಮಮಲಂ ಪ್ರವದಂತಿ ಸಂತಃ ॥24॥

ತಾವು ಈಶ್ವರ, ಆದಿಪುರುಷ, ಬ್ರಹ್ಮ ಅನಂತ ।
ಯೋಗಿಶ್ವರ ಅಮಲ ಹೀಗೆ ಕವಿಗಳ ವರ್ಣನೆ ಅನವರತ ॥24॥





ಬುದ್ಧಸ್ – ತ್ವಮೇವ ವಿಬುಧಾರ್ಚಿತ ಬುದ್ಧಿಬೋಧಾತ್ ।
ತ್ವಂ ಶಂಕರೋಽಸಿ ಭುವನತ್ರಯ ಶಂಕರತ್ವಾತ್ ॥
ಧಾತಾಸಿ ಧೀರ ಶಿವಮಾರ್ಗ ವಿಧೇರ್ವಿಧಾನಾತ್ ।
ವ್ಯಕ್ತಂ ತ್ವಮೇವ ಭಗವನ್ ಪುರುಷೋತ್ತಮೋಽಸಿ ॥25॥

ತಾವು ಬುದ್ಧ, ಕೇವಲಜ್ಞಾನಿ, ಮೂರು ಲೋಕಗಳಿಗೆ ಸುಖ ನೀಡುವ ಶಂಕರ ।
ಮೋಕ್ಷ ಮಾರ್ಗ ದರ್ಶಕ, ವಿಧಾತಾ, ಬ್ರಹ್ಮ ಭಾಗ್ಯದಾತಾ ಅಭಯಂಕರ ॥25॥



ತುಭ್ಯಂ ನಮಸ್ತ್ರಿಭುವನಾರ್ತಿ ಹರಾಯನಾಥ ।
ತುಭ್ಯಂ ನಮಃ ಕ್ಷಿತಿತಲಾ – ಮಲ ಭೂಷಣಾಯ ॥
ತುಭ್ಯಂ ನಮಸ್ತ್ರಿಜಗತಃ ಪರಮೇಶ್ವರಾಯ ।
ತುಭ್ಯಂ ನಮೋ ಜಿನ ಭವೋದಧಿ ಶೋಷಣಾಯ ॥26॥

ನಮ್ಮ ಕಷ್ಟಗಳನ್ನು ದೂರ ಮಾಡುವ ತಾವು ಭೂಷಣಪ್ರಾಯರು ಮೂರು ಲೋಕಗಳಿಗೆ ।
ಪರಮೇಶ್ವರ ಭವರೋಗ ನಿವಾರಕ, ಬಾರಿ ಬಾರಿಗೂ ನಮಸ್ಕಾರ ತಮ್ಮ ಪಾದಗಳಿಗೆ ॥26॥





ಕೋ ವಿಸ್ಮಯೋऽತ್ರ ಯದಿನಾಮ ಗುಣೈರಶೇಷೈ ।
ಸ್ತ್ವಂಸಂಶ್ರಿತೋ ನಿರವಕಾಶತಯಾ ಮುನೀಶ ॥
ದೋಷೈರು ಪಾತ್ತ ವಿಬುಧಾ – ಶ್ರಯ – ಜಾತ ಗರ್ವೈಃ ।
ಸ್ವಪ್ನಾಂತರೇऽಪಿನ ಕದಾಚಿದಪೀಕ್ಷಿತೋऽಸಿ ॥27॥

ತಾವು ಎಲ್ಲ ಗುಣಗಳಿಂದಲೂ ಅಲಂಕೃತರು ।
ಯಾವುದೇ ದೋಷಗಳು ಕನಸಿನಲ್ಲಿಯೂ ಕಾಣ ಸಿಗದ ಪರಮ ಶಿವರು ॥27॥



ಉಚ್ಚೈರಶೋಕ ತರು ಸಂಶ್ರಿತ ಮುನ್ಮಯೂಖ ।
ಮಾಭಾತಿ ರೂಪಮಮಲಂ ಭವತೋನಿತಾಂತಮ್ ॥
ಸ್ಪಷ್ಟೋಲ್ಲಸತ್ಕಿರಣಮಸ್ತ ತಮೋವಿತಾನಂ ।
ಬಿಂಬರವೇರಿವ ಪಯೋಧರ ಪಾರ್ಶ್ವವರ್ತಿ ॥28॥

ತಮ್ಮ ರೂಪ ಸ್ಪಷ್ಟಸುಂದರ ಅಶೋಕ ವೃಕ್ಷ ಹಿಂದೆ ಇರುವಾಗ ।
ಹೇಗೆ ಸೂರ್ಯನ ರೂಪ ಸ್ಪಷ್ಟಸುಂದರ ಕರಿ ಮೋಡಗಳ ಬಳಿ ಇರುವಾಗ ॥28॥





ಸಿಂಹಾಸನೇ ಮಣಿಮಯೂಖ ಶಿಖಾವಿಚಿತ್ರೇ ।
ವಿಭ್ರಾಜತೆ ತವ ವಪುಃ ಕನಕಾವದಾತಮ್ ॥
ಬಿಂಬಂ ವಿಯದ್ವಿಲ ಸದಂಶುಲ ತಾವಿತಾನಂ ।
ತುಂಗೋದಯಾದ್ರಿ ಶಿರಸೀವ ಸಹಸ್ರರಶ್ಮೇಃ ॥29॥

ಸೂರ್ಯನ ಕಾಂತಿ ಹೊಳೆಯುತಿದೆ ಉದಯಾಚಲ ಶಿಖರದ ಮೇಲೆ ।
ತಮ್ಮ ಸುಂದರ ರೂಪ ಮನೋಹರವಾಗಿದೆ ಸುವರ್ಣ ಸಿಂಹಾಸನದ ಮೇಲೆ ॥29॥



ಕುಂದಾವದಾತ ಚಲಚಾಮರ ಚಾರುಶೋಭಂ ।
ವಿಭ್ರಾಜತೇ ತವ ವಪುಃ ಕಲಧೌತಕಾಂತಮ್ ॥
ಉದ್ಯಚ್ಛಶಾಂಕಶುಚಿ ನಿರ್ಝರ ವಾರಿದಾರ ।
ಮುಚ್ಚೈಸ್ –ತಟಂ ಸುರಗಿರೇರಿವ ಶಾತಕೌಂಭಮ್ ॥30॥

ಬಂಗಾರದಂತೆ ಕಾಂತಿಯುತ ತಮ್ಮ ಶರೀರ ।
ಇನ್ನೂ ಶೋಭಾಯಮಾನವಾಗಲು ಬೀಸುತಿದೆ ಚಾಮರ ॥30॥





ಛತ್ರತ್ರಯಂ ತವ ವಿಭಾತಿ ಶಶಾಂಕಕಾಂತ ।
ಮುಚ್ಚೈಃ ಸ್ಥಿತಂ ಸ್ಥಗಿತ ಭಾನುಕರ ಪ್ರತಾಪಮ್ ॥
ಮುಕ್ತಾಫಲ ಪ್ರಕರ ಜಾಲ ವಿವೃದ್ಧ ಶೋಭಂ ।
ಪ್ರಖ್ಯಾಪಯತ್ತ್ರಿ ಜಗತಃ ಪರಮೇಶ್ವರತ್ವಮ್ ॥31॥

ಸ್ವಾಮಿ, ತಮ್ಮ ತಲೆಯ ಮೇಲೆ ಮೂರು ಛತ್ರಿಗಳು ಕಂಗೊಳಿಸುತ್ತಿವೆ ।
ತಾವು ಮೂರು ಲೋಕದ ಸ್ವಾಮಿ ಎಂದು ಸಾರುತ್ತಿವೆ ॥31॥



ಗಂಭೀರತಾರರವಪೂರಿತ ದಿಗ್ವಿಭಾಗ ।
ಸ್ತ್ರೈಲೋಕ್ಯ ಲೋಕಶುಭಸಂಗಮ ಭೂತಿದಕ್ಷಃ ॥
ಸದ್ಧರ್ಮರಾಜ ಜಯಘೋಷಣ ಘೋಷಕ ಃ ಸನ್ ।
ಖೇ ದುಂದುಭಿರ್ಧ್ವನತಿ ತೇ ಯಶಸಃ ಪ್ರವಾದೀ ॥32॥

ಜಿನಧರ್ಮದ ಹಾಗೂ ಭಗವಂತರ ಯಶೋಗಾನ ಗಗನ ಮಂಡಲದಲ್ಲಿ ನಡೆದಿದೆ ।
ದುಂದುಭಿಯ ಸುಮಧುರ ಸ್ವರ ಇದಕ್ಕೆ ಕಾರಣವಾಗಿದೆ ॥32 ॥





ಮಂದಾರಸುಂದರನಮೇರು ಸುಪಾರಿಜಾತ ।
ಸಂತಾನಕಾದಿ ಕುಸುಮೋತ್ಕರ ವೃಷ್ಟಿರುದ್ಧಾ ॥
ಗಂಧೋದಬಿಂದು ಶುಭಮಂದ ಮರುತ್ಪ್ರಪಾತಾ ।
ದಿವ್ಯಾದಿವಃ ಪತತಿ ತೇ ವಚಸಾಂ ತತಿರ್ವಾ ॥33॥

ವೃಷ್ಟಿಯಾಗುತಿದೆ ಮಂದಾರ, ಸುಂದರ, ನಮೇರು, ಪಾರಿಜಾತ ಪುಷ್ಪಗಳಿಂದ ।
ವಚನ ವೃಷ್ಟಿಯಂತೆ ಕಾಣುತಿದೆ, ತಮ್ಮ ನಗು ಮೊಗದಿಂದ ॥33॥



ಶುಂಭತ್ ಪ್ರಭಾವಲಯ ಭೂರಿವಿಭಾ ವಿಭೋಸ್ತೇ ।
ಲೋಕತ್ರಯೇ ದ್ಯುತಿಮತಾಂ ದ್ಯುತಿಮಾಕ್ಷಿಪಂತಿ ॥
ಪ್ರೊದ್ಯದ್ದಿವಾಕರ ನಿರಂತರ ಭೂರಿಸಂಖ್ಯಾ ।
ದೀಪ್ತ್ಯಾಜಯತ್ಯಪಿ ನಿಶಾಮಪಿ ಸೋಮಸೌಮ್ಯಾಮ್ ॥34॥

ತಮ್ಮ ಪ್ರಭಾಮಂಡಲದ ಜ್ಯೋತಿ ಅಸಂಖ್ಯ ಸೂರ್ಯರ ಕಾಂತಿಗೆ ಸಮ ।
ಆದರೂ ಚಂದ್ರನ ಹಾಗೆ ಸೌಮ್ಯ ಶೀತಲವಾಗಿದೆ – ಇದು ಅನುಪಮ ॥34॥





ಸ್ವರ್ಗಾಪವರ್ಗ ಗಮಮಾರ್ಗ ವಿಮಾರ್ಗಣೇಷ್ಟಃ ।
ಸದ್ಧರ್ಮತತ್ವಕಥನೈ ಕಪಟುಸ್ತ್ರಿಲೋಕ್ಯಾ ಃ ॥
ದಿವ್ಯಧ್ವನಿರ್ಭವತಿ ತೇ ವಿಶದಾರ್ಥ ಸರ್ವ ।
ಭಾಷಾಸ್ವಭಾವ ಪರಿಣಾಮ ಗುಣ ಪ್ರಯೋಜ್ಯಃ ॥35॥

ತಮ್ಮ ದಿವ್ಯ ಧ್ವನಿಯು ಸ್ವರ್ಗ – ಮೋಕ್ಷಗಳ ಮಾರ್ಗವನ್ನು ತೋರಿಸುತಿದೆ ।
ಇದು ಎಲ್ಲಾ ಜೀವಿಗಳಿಗೂ ಅವರವರ ಭಾಷೆಯಲ್ಲಿ ತಿಳಿಯುತಿದೆ ॥35॥



ಉನ್ನಿದ್ರ ಹೇಮನವಪಂಕಜ ಪುಂಜಕಾಂತಿ ।
ಪರ್ಯುಲ್ಲಸನ್ನ ಖಮಯೂಖ ಶಿಖಾಭಿರಾಮೌ ॥
ಪಾದೌ ಪದಾನಿ ತವ ಯತ್ರ ಜಿನೇಂದ್ರ ಧತ್ತಃ ।
ಪದ್ಮಾನಿ ತತ್ರ ವಿಭುದಾಃ ಪರಿಕಲ್ಪಯಂತಿ ॥36॥

ತಮ್ಮ ಪಾದಗಳು ಚಿನ್ನದ ತಾವರೆ ಹೂಗಳಂತೆ ಕಾಂತಿಯುಳ್ಳವುಗಳಾಗಿವೆ ।
ನೀವು ಹೆಜ್ಜೆ ಇಟ್ಟಾಗ ದೇವತೆಗಳಿಂದ ಸ್ವರ್ಣ ಕಮಲಗಳ ರಚನೆಯಾಗಿವೆ ॥36॥





ಇತ್ಥಂ ಯಥಾ ತವ ವಿಭೂತಿರಭೂಜ್ಜಿನೇಂದ್ರ ।
ಧರ್ಮೋಪದೇಶನ ವಿದೌ ನ ತಥಾ ಪರಸ್ಯ ॥
ಯಾದೃಕ್ ಪ್ರಭಾ ದಿನಕೃತಃ ಪ್ರಹತಾಂಧಕಾರಾ ।
ತಾದೃಕ್ಕುತೋಗ್ರಹಗಣಸ್ಯ ವಿಕಾಸಿನೋಽಪಿ ॥37॥

ತಾವು ಸಮೋಶರಣದಲ್ಲಿ ಧರ್ಮೋಪದೇಶ ಮಾಡುವಾಗ ಕಾಣುವ ಐಶ್ವರ್ಯ ।
ಬೇರೆ ಕಡೆ ಕಾಣದು, ಸೂರ್ಯನ ಮುಂದೆ ತಾರೆಗಳಂತೆ, ಇದು ಆಶ್ಚರ್ಯ ॥37॥



ಶ್ಚ್ಯೋತನ್ಮದಾವಿಲವಿಲೋಲ ಕಪೋಲಮೂಲ ।
ಮತ್ತಭ್ರಮದ್ಭ್ರಮರನಾದ ವಿವೃದ್ಧ ಕೋಪಮ್॥
ಐರಾವತಾಭಮಿಭಮುದ್ಧತ ಮಾಪತಂತಂ ।
ದೃಷ್ಟ್ವಾ ಭಯಂ ಭವತಿ ನೋ ಭವದಾಶ್ರಿತಾನಾಮ್ ॥38॥

ಮುತ್ತಿಕೊಂಡಾಗ ದುಂಬಿಗಳು ಐರಾವತ ಆನೆಯ ಮದ ಜಲಕ್ಕೆ ।
ಕ್ರೋಧಗೊಂಡಿದ್ದರೂ ಅದು ಹಾನಿ ಮಾಡದು, ತಮ್ಮ ಭಕ್ತ ಜನಕ್ಕೆ ॥38॥





ಭಿನ್ನೇಭ ಕುಂಭಗಲದುದ್ಜ್ವಲ ಶೋಣಿತಾಕ್ತ ।
ಮುಕ್ತಾಫಲ ಪ್ರಕರ ಭೂಷಿತ ಭೂಮಿಭಾಗಃ ॥
ಬದ್ಧಕ್ರಮಃ ಕ್ರಮಗತಂ ಹರಿಣಾಧಿಪೋಽಪಿ ।
ನಾಕ್ರಾಮತಿ ಕ್ರಮಯುಗಾಚಲ ಸಂಶ್ರಿತಂ ತೇ ॥39॥

ಸಿಂಹದ ಆಕ್ರಮಣದಿಂದ, ಆನೆಯ ಕುಂಭ ಸ್ಥಳದಿಂದ ಗಜ ಮುತ್ತುಗಳು ಉದುರುವಾಗ ।
ಭೀಕರ ಸ್ವರೂಪದ ವನರಾಜ ಶಾಂತನಾಗುವನು ತಮ್ಮ ಭಕ್ತರು ಬರುವಾಗ ॥39॥



ಕಲ್ಪಾಂತಕಾಲ ಪವನೋದ್ಧತ ವಹ್ನಿಕಲ್ಪಂ ।
ದಾವಾನಲಂ ಜ್ವಲಿತಮುಜ್ಜ್ವಲಮುತ್ಸ್ಫುಲಿಂಗಮ್ ॥
ವಿಶ್ವಂಜಿಘತ್ಸುಮಿವ ಸಂಮುಖಮಾಪತಂತಂ ॥
ತ್ವನ್ನಾಮಕೀರ್ತನಜಲಂ ಶಮಯತ್ಯಶೇಷಮ್ ॥40॥

ಭಯಂಕರ ಬಿರುಗಾಳಿಯಿಂದ ಕಾಡಿನಲ್ಲಿ ಬೆಂಕಿ ಹತ್ತಿ ಉರಿಯುವುದು ।
ತಮ್ಮ ನಾಮ ಸಂಕೀರ್ತನೆಯಿಂದ ತಕ್ಷಣ ಅದು ಶಾಂತವಾಗುವುದು ॥40॥





ರಕ್ತೇಕ್ಷಣಂ ಸಮದಕೋಕಿಲ ಕಂಠನೀಲಂ ।
ಕ್ರೋಧೋದ್ಧತಂ ಫಣಿನ ಮುತ್ಫಣ ಮಾಪತಂತಮ್ ॥
ಆಕ್ರಾಮತಿ ಕ್ರಮಯುಗೇಣ ನಿರಸ್ತಶಂಕ ಃ ।
ತ್ವನ್ನಾಮನಾಗದಮನೀ ಹೃದಿಯಸ್ಯ ಪುಂಸಃ ॥41॥

ಬುಸುಗುಡುತ ಹೆಡೆ ಎತ್ತಿದೆ ಕಾಳಿಂಗ ಸರ್ಪ, ಭಯಂಕರ ।
ಅಕಸ್ಮಾತ್ ತುಳಿದರೂ ತಮ್ಮ ಭಕ್ತರನು ಕಚ್ಚದು, ಇದು ವಿಸ್ಮಯಕರ ॥41॥



ವಲ್ಗತ್ತುರಂಗ ಗಜಗರ್ಜಿತ ಭೀಮನಾದ ।
ಮಾಜೌಬಲಂ ಬಲವತಾಮಪಿ ಭೂಪತೀನಾಮ್ ॥
ಉದ್ಯದ್ದಿವಾಕರಮಯೂಖ ಶಿಖಾಪವಿದ್ಧಂ ।
ತ್ವತ್ ಕೀರ್ತಿನಾತ್ತಮ ಇವಾಶು ಭಿದಾಮುಪೈತಿ ॥42॥

ಸೂರ್ಯನ ಪ್ರಕಾಶಕ್ಕೆ ಕತ್ತಲೆಯ ಓಟ ।
ತಮ್ಮ ಭಕ್ತರ ಮುಂದೆ ಆನೆ ಕುದುರೆಗಳಿಂದ ಕೂಡಿದ ವೈರಿಗಳು ಸೋತು ಓಟ ॥42 ॥





ಕುಂತಾಗ್ರ ಭಿನ್ನಗಜಶೋಣಿತ ವಾರಿವಾಹ ।
ವೇಗಾವತಾರ ತರಣಾತುರ ಯೋಧಭೀಮೇ ॥
ಯುದ್ಧೇ ಜಯಂ ವಿಜಿತ ದುರ್ಜಯ ಜೇಯಪಕ್ಷಾಃ ।
ತ್ವತ್ಪಾದ ಪಂಕಜವನಾಶ್ರಯಿಣೋ ಲಭಂತೇ ॥43॥

ಭಯಂಕರ ಯುದ್ದದಲ್ಲಿ ಆನೆಗಳು ಹತ, ಭಯದಿಂದ ಸೈನಿಕರ ಪರದಾಟ ।
ತಮ್ಮನ್ನು ನಂಬಿದವರಿಗೆ ಮಾತ್ರ ಜಯ ಖಂಡಿತ, ಇದು ಭಕ್ತಿಯ ಒಡನಾಟ ॥43॥



ಅಂಭೋನಿಧೌ ಕ್ಷುಭಿತ ಭೀಷಣ ನಕ್ರಚಕ್ರ ।
ಪಾಠೀನ ಪೀಠ ಭಯದೋಲ್ಬಣ ವಾಡವಾಗ್ನೌ ॥
ರಂಗತ್ತರಂಗ ಶಿಖರಸ್ಥಿತ ಯಾನ ಪಾತ್ರಾಃ ।
ತ್ರಾಸಂ ವಿಹಾಯ ಭವತಃ ಸ್ಮರಣಾದ್ವ್ರಜಂತಿ ॥44॥

ಸಮುದ್ರದಲ್ಲಿ ಬಿರುಗಾಳಿಗೆ ಅಲೆಗಳು ಎದ್ದಿವೆ, ಭಯಂಕರ ।
ತಮ್ಮನ್ನು ಸ್ಮರಿಸುವ ಭಕ್ತರ ಹಡಗು ಸುರಕ್ಷಿತ ಸಾಗಿದೆ, ಇದು ಅಲ್ಹಾದಕರ ॥44॥





ಉದ್ಭೂತ ಭೀಷಣ ಜಲೋದರ ಭಾರಭುಗ್ನಾಃ ।
ಶೋಚ್ಯಾಂ ದಶಾಮುಪಗತಾಶ್ಚ್ಯುತ ಜೀವಿತಾಶಾಃ ।
ತ್ವತ್ಪಾದ ಪಂಕಜರಜೋಽಮೃತ ದಿಗ್ಧ ದೇಹಾ ।
ಮರ್ತ್ಯಾ ಭವಂತಿ ಮಕರಧ್ವಜ ತುಲ್ಯ ರೂಪಾಃ ॥45॥

ತಮ್ಮ ಪಾದ ಧೂಳಿಯನ್ನು ಲೇಪಿಸಿಕೊಂಡ ಜಲೋದರ ಇತ್ಯಾದಿ ಭೀಕರ ರೋಗಿ ।
ಮನ್ಮಥನಂತೆ ಕಾಣುವನು ಆತ ನಿರೋಗಿಯಾಗಿ ॥45॥



ಆಪಾದಕಂಠ ಮುರುಶೃಂಖಲ ವೇಷ್ಟಿತಾಂಗಾ ।
ಗಾಢಂ ಬೃಹನ್ನಿಗಡಕೋಟಿ ನಿಘೃಷ್ಟಜಂಘಾಃ ॥
ತ್ವನ್ನಾಮ ಮಂತ್ರಮನಿಶಂ ಮನುಜಾಃ ಸ್ಮರಂತಃ ।
ಸದ್ಯಃ ಸ್ವಯಂ ವಿಗತಬಂಧ ಭಯಾ ಭವಂತಿ ॥46॥

ಕಾರಾಗೃಹದಲ್ಲಿ ಬೇಡಿಗಳಿಂದ ಸಂಪೂರ್ಣ ಬಂಧಿತನಾದ ವ್ಯಕ್ತಿ ।
ತಮ್ಮ ನಾಮ ಸ್ಮರಣೆಯಿಂದ ಬಿಡುಗಡೆ ಹೊಂದಿ ಪಡೆಯುವನು ಮುಕ್ತಿ ॥46॥





ಮತ್ತದ್ವಿಪೇಂದ್ರ, ಮೃಗರಾಜ ದವಾನಲಾಹಿ ।
ಸಂಗ್ರಾಮವಾರಿಧಿ ಮಹೋದರ ಬಂಧನೋತ್ಥಮ್ ॥
ತಸ್ಯಾಶು ನಾಶಮುಪಯಾತಿ ಭಯಂ ಭಿಯೇವ ।
ಯಸ್ತಾವಕಂ ಸ್ತವಮಿಮಂ ಮತಿಮಾನಧೀತೇ ॥47॥

ಕ್ರೂರ ಸಿಂಹ, ಆನೆ, ಬೆಂಕಿ ಸರ್ಪಗಳ ಉಪಸರ್ಗ ಭಯಂಕರ ।
ತಮ್ಮನ್ನು ನಂಬಿ ಸ್ತುತಿಸುವವನು ಪಾರಾಗುವನು ಇದು ಆಶ್ಚರ್ಯಕರ ॥47॥



ಸ್ತೋತ್ರಸ್ರಜಂ ತವಜಿನೇಂದ್ರ, ಗುಣೈರ್ನಿಬದ್ಧಾಂ ।
ಭಕ್ತ್ಯಾಮಯಾ ರೂಚಿರವರ್ಣ ವಿಚಿತ್ರಪುಷ್ಪಾಮ್ ॥
ಧತ್ತೇ ಜನೋ ಯ ಇಹ ಕಂಠಗತಾಮಜಸ್ರಂ ।
ತಂ ಮಾನತುಂಗ ಮವಶಾ ಸಮುಪೈತಿ ಲಕ್ಷ್ಮೀ: ॥48॥

ಭಕ್ತಿಯೆಂಬ ಹೂಗಳನ್ನು, ಸದ್ಗುಣ ಎಂಬ ನೂಲಿನಲ್ಲಿ ಮಾಲೆ ಮಾಡಿ ।
ಕಂಠದಲ್ಲಿ ಧರಿಸಿದಾಗ ಭಕ್ತರು ಪಡೆಯುವರು ಮೋಕ್ಷ, ಕರ್ಮ ಕ್ಷಯ ಮಾಡಿ ॥48॥